

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## **ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 31-03-2021 ಪ್ರಶ್ನೆ ಸಂಖ್ಯೆ : 3044 (2512)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 31-03-2021

ಉತ್ತರಿಸುವ ಸಚಿವರು: ವಸತಿ ಸಚಿವರು

ವಿಷಯ : ಪ್ರಧಾನ ಮಂತ್ರಿ ಆವಾಸ್ ಯೋಜನೆಯಡಿ ವಸತಿ ಗೃಹಗಳ ಹಂಚಿಕೆ

(ಅ) ರಾಜ್ಯದಲ್ಲಿ ಪ್ರಧಾನ ಮಂತ್ರಿ ಆವಾಸ್ ಯೋಜನೆಯು ಜಾರಿಯಾದ ದಿನದಿಂದ ಈವರೆಗೆ ಈ ಯೋಜನೆಯಡಿ ವಿವಿಧ ವರ್ಗಗಳ ವಸತಿಹೀನರಿಗೆ ನಗರ, ಪಟ್ಟಣ ಮತ್ತು ಘೋಷಿತ ಯೋಜನಾ ಪ್ರಾಧಿಕಾರಗಳಲ್ಲಿ ಮಂಜೂರು ಮಾಡಿರುವ ವಸತಿ ಗೃಹಗಳೆಷ್ಟು; (ಜಿಲ್ಲಾವಾರು ವಿವರ ನೀಡುವುದು)

(ಆ) ಈ ಯೋಜನೆ ಅಡಿಯಲ್ಲಿ ಮಂಜೂರು ಮಾಡಿರುವ ವಸತಿ ಗೃಹಗಳ ನಿರ್ಮಾಣ ಯಾವ ಹಂತದಲ್ಲಿವೆ ; (ಸಂಪೂರ್ಣ ಜಿಲ್ಲಾವಾರು ವಿವರ ನೀಡುವುದು)

(ಇ) ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ವಸತಿ ಗೃಹಗಳಿಗೆ ಹೆಚ್ಚಿನ ಬೇಡಿಕೆ ಇದ್ದು, ಈ ಬೇಡಿಕೆಯನ್ನು ಪೂರೈಸಲು ಸಮೀಕ್ಷೆ ನಡೆಸಿ ರೂಪಿಸಿರುವ ಕಾರ್ಯ ಯೋಜನೆಗಳು ಯಾವುವು ? (ಪೂರ್ಣ ವಿವರ ನೀಡುವುದು)